# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 288(344) |
| ವಿಧಾನ ಪರಿಷತ್ ಸದಸ್ಯರ ಹೆಸರು | : | ಡಾ॥ ಜಯಮಾಲ ರಾಮಚಂದ್ರ(ನಾಮನಿರ್ದೇಶನ ಹೊಂದಿದವರು) |
| ಉತ್ತರಿಸುವ ದಿನಾಂಕ | : | 09-02-2018(ಕಾಲಾವಕಾಶ ಪಡೆಯಲಾದ ಪ್ರಶ್ನೆ) |
| ಉತ್ತರಿಸುವವರು | : | ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು. |

| ಕ್ರಸಂ | ಪ್ರಶ್ನೆಗಳು | ಉತ್ತರ |
|---|---|---|
| (ಅ) | ಕರ್ನಾಟಕ ರಾಜ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ವಿಶ್ವವಿದ್ಯಾಲಯ ಸ್ಥಾಪನೆಯ ಉದ್ದೇಶದ ಬಗ್ಗೆ ವಿವರ ನೀಡುವುದು; | ಕರ್ನಾಟಕ ರಾಜ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ವಿಶ್ವವಿದ್ಯಾಲಯವು 2016ರ ಕರ್ನಾಟಕ ಅಧಿನಿಯಮ ಸಂಖ್ಯೆ 16ರ ಅಡಿಯಲ್ಲಿ ಸ್ಥಾಪಿತಗೊಂಡಿದೆ. ಈ ವಿಶ್ವವಿದ್ಯಾಲಯವು ರಾಷ್ಟ್ರದಲ್ಲಿಯೇ ಪ್ರಥಮ ಪ್ರಯೋಗವಾಗಿದ್ದು ವಿಶಿಷ್ಟವಾದ ಸಂಸ್ಥೆಯಾಗಿದೆ. ವಿಶ್ವವಿದ್ಯಾಲಯವು ಬದ್ಧತೆಯುಳ್ಳ ಸಮರ್ಪಣಾ ಮನೋಭಾವದ ಜನ ಸಮುದಾಯವನ್ನು ಸೃಷ್ಟಿಸುವುದರ ಮೂಲಕ ಗ್ರಾಮಗಳ ಬಡತನ ನಿರ್ಮೂಲನೆ, ಕೌಶಲ್ಯಾಭಿವೃದ್ಧಿ ಮೂಲಕ ಉದ್ಯೋಗವಕಾಶಗಳನ್ನು ಸೃಷ್ಟಿಸಿ ಗ್ರಾಮ ಸಮಾಜವನ್ನು ಸುಸ್ಥಿರ ಗ್ರಾಮಾಭಿವೃದ್ಧಿಯತ್ತ ಪರಿವರ್ತಿಸುವ ಉತ್ಕೃಷ್ಟ ಕೇಂದ್ರವಾಗಿ ಕಾರ್ಯ ನಿರ್ವಹಿಸುವ ಉದ್ದೇಶವನ್ನು ಹೊಂದಿದೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪಂಚಾಯತ ರಾಜ್ ಸಂಸ್ಥೆಗಳನ್ನು ಬಲಪಡಿಸುವ, ಮತ್ತು ಜನರು ತಮ್ಮ ಕಲ್ಯಾಣವನ್ನು, ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಯನ್ನು ತಾವೇ ನಿರ್ಧರಿಸುವುದರ ಮೂಲಕ ಪ್ರಗತಿ ಸಾಧಿಸಬೇಕಾಗಿದೆ. ವಿಶ್ವವಿದ್ಯಾಲಯವು ಗ್ರಾಮೀಣ ಜನರಲ್ಲಿ ಸ್ವಯಂ ಆಡಳಿತ ನಡೆಸಲು ಅನುಕೂಲವಾಗುವಂತೆ ತರಬೇತಿ, ಬೋಧನೆ ಮತ್ತು ಸಂಶೋಧನೆಗಳ ಮೂಲಕ ಗ್ರಾಮಗಳ ಒಟ್ಟಾರೆ ವಿಕಾಸಕ್ಕೆ ತೊಡಗಿಸಿಕೊಳ್ಳುವುದು, ವಿಶ್ವವಿದ್ಯಾಲಯವು ಕೃಷಿ ಉದ್ದಿಮೆಗಳನ್ನು ಗ್ರಾಮೀಣ ಜನರಿಗೆ ಪರಿಚಯಿಸುವುದು ಮತ್ತು ಪ್ರಾತ್ಯಕ್ಷಿಕೆಗಳನ್ನು ಒದಗಿಸುವ ಕೇಂದ್ರವನ್ನಾಗಿ ಮತ್ತು ಗ್ರಾಮೀಣಾಭಿವೃದ್ಧಿಗೆ ತಾಂತ್ರಿಕ ಕೇಂದ್ರವನ್ನಾಗಿಸುವುದರ ಮೂಲಕ ಉನ್ನತ ಮಟ್ಟದ ಶೈಕ್ಷಣಿಕ ಕೇಂದ್ರವಾಗುವ ಉದ್ದೇಶವನ್ನು ಹೊಂದಿದೆ. |
| (ಆ) | ಈ ವಿಶ್ವವಿದ್ಯಾಲಯದಲ್ಲಿ ಲಭ್ಯವಿರುವ ಕೋರ್ಸುಗಳ ವಿವರ ಮತ್ತು ಈ ಕೋರ್ಸುಗಳಿಗೆ ಸೇರಲು ಬೇಕಾಗಿರುವ ಅರ್ಹತೆ ಬಗ್ಗೆ ವಿವರ ನೀಡುವುದು; | ವಿಶ್ವವಿದ್ಯಾಲಯದ ಪ್ರಾರಂಭದ ವರ್ಷ 2017-18 ನೇ ಶೈಕ್ಷಣಿಕ ಸಾಲಿನಿಂದ ಈ ಕೆಳಕಂಡ ಐದು ಸ್ನಾತಕೋತ್ತರ ಕೋರ್ಸುಗಳನ್ನು ಪ್ರಾರಂಭಿಸಲಾಗಿದೆ.<br>6) ಎಂ.ಬಿ.ಎ- ಗ್ರಾಮೀಣ ನಿರ್ವಹಣೆ, ಕೃಷಿ ವ್ಯವಹಾರ ನಿರ್ವಹಣೆ/ಗ್ರಾಮೀಣಾಭಿವೃದ್ಧಿ / ಉದ್ಯಮಶೀಲತೆ ನಿರ್ವಹಣೆ ವಿಶೇಷತೆಯೊಂದಿಗೆ.<br>7) ಎಂ.ಎ- ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ ರಾಜ್/ ಗ್ರಾಮೀಣಾಭಿವೃದ್ಧಿ ಮತ್ತು ಸಹಕಾರಿ ನಿರ್ವಹಣೆ<br>8) ಎಂ.ಎಸ್ಸಿ- ಜಿಯೋಇನ್ಫಾರ್‌ಮೆಟಿಕ್ಸ್<br>9) ಎಂ.ಎಸ್.ಡಬ್ಲ್ಯು- ಸಮುದಾಯ ಅಭಿವೃದ್ಧಿ/ಗ್ರಾಮೀಣ ಪುನರ್ ನಿರ್ಮಾಣ<br>10) ಎಂ.ಕಾಂ- ಉದ್ಯಮಶೀಲತೆ / ಸಹಕಾರಿ ನಿರ್ವಹಣೆ<br>ಪ್ರವೇಶ ಅರ್ಹತೆಗಳನ್ನು ಅನುಬಂಧ - 1ರಲ್ಲಿ ಕೊಡಲಾಗಿದೆ. |

| | | |
|---|---|---|
| (ಇ) | ತರಗತಿಗಳು ಪ್ರಾರಂಭವಾಗಿದ್ದಲ್ಲಿ ಎಷ್ಟು ವಿದ್ಯಾರ್ಥಿಗಳು ಸೇರ್ಪಡೆಗೊಂಡಿದ್ದಾರೆ; (ವಿಷಯವಾರು/ಕೋರ್ಸುವಾರು ವಿವರಣೆ ನೀಡುವುದು) | ವಿವರಗಳನ್ನು ಅನುಬಂಧ 2 ರಲ್ಲಿ ಕೊಡಲಾಗಿದೆ. |
| ಈ) | ಈ ವಿಶ್ವವಿದ್ಯಾಲಯದಲ್ಲಿ ಲಭ್ಯವಿರುವ ಶಿಕ್ಷಣವನ್ನು ದೂರ-ಶಿಕ್ಷಣ (Distance Learning Correspondence) ಮೂಲಕ ಪಡೆಯಲು ಸಾಧ್ಯವಿದೆಯೇ? (ವಿವರ ನೀಡುವುದು) | ವಿಶ್ವವಿದ್ಯಾಲಯದಲ್ಲಿ ಪ್ರಾರಂಭಿಸುವ ಎಲ್ಲಾ ಕೋರ್ಸುಗಳು ಕಡ್ಡಾಯವಾಗಿ ಕ್ಷೇತ್ರ ಕಾರ್ಯಗಳನ್ನು (Field Study) ಒಳಗೊಂಡಿರುವುದರಿಂದ ಸದ್ಯಕ್ಕೆ ದೂರ-ಶಿಕ್ಷಣದ ಮೂಲಕ ಪಡೆಯಲು ಅವಕಾಶ ಕಲ್ಪಿಸಿರುವುದಿಲ್ಲ. ಮುಂದಿನ ವರ್ಷಗಳಲ್ಲಿ ವಿಶ್ವವಿದ್ಯಾಲಯ ಅನುದಾನ ಆಯೋಗದ (ಯುಜಿಸಿ) ನೀತಿ ನಿಯಮ ಮತ್ತು ನಿರ್ದೇಶನಗಳಿಗನುಸಾರ ಕೆಲವು ಆನ್‌ಲೈನ್ (On-line) ಕೋರ್ಸುಗಳನ್ನು ಪ್ರಾರಂಭಿಸಲಾಗುವುದು. |

**ಸಂಖ್ಯೆ: ಗ್ರಾಅಪ 54 ಜಿಪಸ 2018**

(ಎಚ್.ಕೆ. ಪಾಟೀಲ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು.

## ಅನುಬಂಧ–1

## 2017–18 ಸಾಲಿನ ಸ್ನಾತಕೋತ್ತರ ಕೋರ್ಸುಗಳ ಪ್ರವೇಶಕ್ಕೆ ಅರ್ಹತೆ.

| | | |
|---|---|---|
| 1. | ಎಂ.ಬಿ.ಎ– ಗ್ರಾಮೀಣ ನಿರ್ವಹಣೆ (ಕೃಷಿ ವ್ಯವಹಾರ ನಿರ್ವಹಣೆ, ಗ್ರಾಮೀಣಾಭಿವೃದ್ಧಿ ಮತ್ತು ಉದ್ದಿಮೆಶೀಲತೆ ನಿರ್ವಹಣೆ ವಿಶೇಷತೆಯೊಂದಿಗೆ). | ರಾಜ್ಯ ಸರ್ಕಾರ ಕಾಲಕಾಲಕ್ಕೆ ಶಿಫಾರಸ್ಸು ಮಾಡುವ ಅರ್ಹತೆ:ಸ್ನಾತಕ ಪದವಿಯಲ್ಲಿ ಭಾಷೆಗಳನ್ನು ಒಳಗೊಂಡು ಸರಾಸರಿ ಶೇಕಡ 50 ಅಂಕಗಳನ್ನು ಪಡೆದ (ಪ.ಜಾ/ ಪ.ಪಂ/ಪ್ರವರ್ಗ.1/ವಿಶೇಷ ಚೇತನರಿಗೆ ಶೇ.45) ಪದವೀದರರು. |
| 2. | ಎಂ.ಎ– ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ ರಾಜ್ / ಗ್ರಾಮೀಣಾಭಿವೃದ್ಧಿ ಮತ್ತು ಸಹಕಾರಿ ನಿರ್ವಹಣೆ ಎಂ.ಎಸ್.ಡಬ್ಲ್ಯೂ– ಗ್ರಾಮೀಣ ಪುನರ್ ನಿರ್ಮಾಣ | ಯಾವುದೇ ವಿಷಯದಲ್ಲಿ ಭಾಷೆಗಳನ್ನು ಒಳಗೊಂಡು ಶೇ 50 ಅಂಕಗಳನ್ನು (ಪ.ಜಾ/ಪ.ಪಂ/ಪ್ರವರ್ಗ.1/ ವಿಶೇಷ ಚೇತನರಿಗೆ ಶೇ.45) ಪಡೆದ ಪದವೀದರರು |
| 3. | ಎಂ.ಎಸ್ಸಿ–ಜಿಯೋಇನ್ಫಾರ್‌ಮೆಟಿಕ್ಸ್ | ಯಾವುದೇ ವಿಜ್ಞಾನ ಅಥವಾ ಇಂಜೀನಿಯರಿಂಗ್ ವಿಷಯದಲ್ಲಿ ಸರಾಸರಿ ಶೇ.50 (ಪ.ಜಾ/ಪ.ಪಂ/ ಪ್ರವರ್ಗ.1/ವಿಶೇಷ ಚೇತನರಿಗೆ ಶೇ.45) ಅಂಕಗಳನ್ನು ಪಡೆದ ಪದವೀದರರು, ಪರಂತು ಅಭ್ಯರ್ಥಿಯು ಪದವಿ ಅಥವಾ ಪದವಿಪೂರ್ವ ಹಂತದಲ್ಲಿ ಗಣಿತವನ್ನು ಓದಿರಬೇಕು. |
| 4. | ಎಂ.ಕಾಂ–ಉದ್ಯಮಶೀಲತೆ/ಸಹಕಾರಿ ನಿರ್ವಹಣೆ | ಬಿ.ಕಾಂ, ಬಿ.ಬಿ.ಎಂ. ಮತ್ತು ಬಿ.ಬಿ.ಎ ಪದವಿ ಪರೀಕ್ಷೆಗಳಲ್ಲಿ ಭಾಷೆಗಳನ್ನು ಒಳಗೊಂಡು ಸರಾಸರಿ ಶೇಕಡ 50 ಅಂಕ (ಪ.ಜಾ/ಪ.ಪಂ/ಪ್ರವರ್ಗ.1/ ವಿಶೇಷ ಚೇತನರಿಗೆ ಶೇ.45) ಪಡೆದ ಪದವೀದರರು. |

ಅನುಬಂಧ-2

**2017-18 ನೇ ಸಾಲಿನಲ್ಲಿ ಪ್ರವೇಶ ಪಡೆದ ವಿದ್ಯಾರ್ಥಿಗಳ ವಿವರ**

| ಕ್ರಮ ಸಂಖ್ಯೆ | ಕೋರ್ಸ್ | ಪುರುಷರು | ಮಹಿಳೆಯರು | ಒಟ್ಟು |
|---|---|---|---|---|
| 1 | ಎಂ.ಬಿ.ಎ | 29 | 6 | 35 |
| 2 | ಎಂ.ಎ | 54 | 14 | 68 |
| 3 | ಎಂ.ಎಸ್.ಸಿ | 17 | 11 | 28 |
| 4 | ಎಂ.ಎಸ್.ಡಬ್ಲ್ಯೂ | 31 | 6 | 37 |
| 5 | ಎಂ.ಕಾಂ. | 16 | 7 | 23 |
| | | | ಒಟ್ಟು | **191** |